## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 341 |
| ಸದಸ್ಯರ ಹೆಸರು | : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 15.12.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕೊಡಗು ಜಿಲ್ಲೆಯಲ್ಲಿ, ಕುಟುಂಬದ ಸರ್ವಸದಸ್ಯರ ಆಸ್ತಿಯಾಗಿರುವ ಜಮ್ಮಾ ಆಸ್ತಿಗೆ ಸಂಬಂಧಿಸಿದಂತೆ, 2000-01 ಸಾಲಿನಲ್ಲಿ ಕೊಡಗು ಜಿಲ್ಲಾಧಿಕಾರಿಗಳ ಆದೇಶವನ್ನು ಆಧರಿಸಿ ಪಟ್ಟೇದಾರರ ಹೆಸರನ್ನು ಆರ್.ಟಿ.ಸಿ.ಯ ಮೂರನೇ ಕಾಲಂನಿಂದ ಒಂಭತ್ತನೇ ಕಾಲಂಗೆ ವರ್ಗಾಹಿಸಿರುವುದರಿಂದ, ಪಟ್ಟೇದಾರರ ವಂಶಸ್ಥರಿಗೆ ಮಾತ್ರ ಇಡೀ ಆಸ್ತಿಯ ಮೇಲೆ ಹಕ್ಕು ಲಭಿಸಿದ್ದು, ಕುಟುಂಬದ ಇತರ ಸದಸ್ಯರು ಅತಂತ್ರರಾಗಿರುವ ಗಂಭೀರ ಸಮಸ್ಯೆ ಸರ್ಕಾರದ ಗಮನಕ್ಕೆ ಬಂದಿದೆಯೇ; | 2000ರ ಪೂರ್ವದಲ್ಲಿ ಕೊಡಗು ಜಿಲ್ಲೆಯಲ್ಲಿ ಪಹಣಿಗೆ ಬದಲಾಗಿ ಜಮಾಬಂದಿ ವಹಿ ಚಾಲ್ತಿಯಲ್ಲಿದ್ದು, ಕುಟುಂಬದ ಹಿರಿಯ ವ್ಯಕ್ತಿಯನ್ನು ಪಟ್ಟೇದಾರರೆಂದು ಕರೆಯಲಾಗುತ್ತಿದೆ. ಸದರಿ ಪಟ್ಟೇದಾರರ ಹೆಸರು ಜಮಾಬಂದಿಯ 3ನೇ ಕಾಲಂ ನಲ್ಲಿ ಅದೇ ಕುಟುಂಬದ ಇತರೆ ಹಕ್ಕುದಾರರ ಹೆಸರು ಜಮಾಬಂದಿಯ 6ನೇ ಕಾಲಂನಲ್ಲಿ ದಾಖಲಾಗುತ್ತಿತ್ತು.<br><br>2000ರ ಪೂರ್ವದಲ್ಲಿ ಕೈಬರಹದ ಪಹಣಿಯನ್ನು ಗ್ರಾಮಲೆಕ್ಕಿಗರು ಕೇವಲ ಬೆಳೆ ದಾಖಲು ಮಾಡಲು ಮಾತ್ರ ಉಪಯೋಗಿಸುತ್ತಿದ್ದು ಅಧಿಕೃತವಾಗಿ ಜಮಾಬಂದಿ ದಾಖಲೆಯನ್ನೇ ಉಳಿದ ಎಲ್ಲಾ ಕಾರ್ಯಗಳಿಗೆ ಅಂದರೆ ಹಕ್ಕುದಾಖಲೆಗೆ, ಬ್ಯಾಂಕ್ ಸಾಲ ಇತ್ಯಾದಿ ಸರ್ಕಾರಿ ಕೆಲಸಗಳಿಗೆ ರೈತರು ಬಳಸುತ್ತಿದ್ದರು.<br><br>ಪಹಣಿ ಗಣಕೀಕರಣ ಪ್ರಾರಂಭಗೊಂಡಾಗ ಕೊಡಗು ಜಿಲ್ಲೆಯಲ್ಲಿ ಕೂಡ ಜಮಾಬಂದಿ ದಾಖಲೆಯನ್ನು ಪಹಣಿಯಾಗಿ ಪರಿವರ್ತಿಸಿ ಗಣಕೀರಣ ಪ್ರಾರಂಭಿಸಿದ್ದು, ಜಿಲ್ಲಾಧಿಕಾರಿಯವರ ಆದೇಶ ಸಂಖ್ಯೆ:ಸಿಎಂಪಿ/02/2000-01 ದಿನಾಂಕ:25.01.2002ರಲ್ಲಿ ಕೈಬರಹದ ಪಹಣಿಯನ್ನು ತ್ಯಜಿಸಿ ದಿನಾಂಕ:01.02.2002ರಿಂದ ಗಣಕೀಕೃತ ಪಹಣಿಯನ್ನು ಜಾರಿಗೊಳಿಸಲಾಗಿರುತ್ತದೆ.<br><br>ಕೊಡಗು ಜಿಲ್ಲೆಯಾದ್ಯಂತ ಈ ಹಿಂದೆ ಜಾರಿಯಲ್ಲಿದ್ದಂತಹ ಜಮಾಬಂದಿ ಪದ್ಧತಿಯಿಂದ ಆರ್.ಟಿ.ಸಿ. ತರ್ಜುಮೆಗೊಂಡು ಭೂ ದಾಖಲೆಗಳನ್ನು ಗಣಕೀಕರಿಸುವ ಸಂದರ್ಭದಲ್ಲಿ ಜಮಾಬಂದಿ 3ನೇ ಕಾಲಂನಲ್ಲಿ ದಾಖಲಿದ್ದ ಕುಟುಂಬದ ಇತರ ಸದಸ್ಯರ ಹೆಸರುಗಳನ್ನು ಜಂಟಿ ಖಾತೆದಾರರನ್ನಾಗಿ ಯಥಾವತ್ತಾಗಿ ದಾಖಲಿಸಲಾಗಿರುತ್ತದೆ. ಕೊಡಗು ಜಿಲ್ಲೆಯಲ್ಲಿ ಜಮ್ಮಾ ಮುಂತಾದ ಕುಟುಂಬದ ಅವಿಭಜಿತ ಪಿತ್ರಾರ್ಜಿತ |

| | | |
|---|---|---|
| | | ಸ್ವತ್ತುಗಳಲ್ಲಿ ಹೆಚ್ಚಾಗಿ ನೋಂದಾಯಿತ ಪಾಲುಪಾರಿಕತ್ತು ಆಗದೇ ಇದ್ದು ಪಾಲುಪಾರಿಕತ್ತು ಹಾಜರುಪಡಿಸಿದ್ದಲ್ಲಿ ಮ್ಯುಟೇಷನ್ ಮೂಲಕ ಭೂ ದಾಖಲೆಗಳಲ್ಲಿ ಅಗತ್ಯ ಬದಲಾವಣೆಗಳಿಗೆ ಅವಕಾಶವಿರುತ್ತದೆ. |
| ಆ. | ಬಂದಿದ್ದಲ್ಲಿ, ಜಮ್ಮಾ ಆಸ್ತಿಯಲ್ಲಿ ಸಮಾನ ಹಕ್ಕು ಹೊಂದಿದ್ದರೂ, ಕೊಡಗು ಜಿಲ್ಲಾಧಿಕಾರಿಗಳ ಸದರಿ ಆದೇಶದ ಅನುಷ್ಠಾನದ ತರುವಾಯ, ಹಕ್ಕು ದೊರೆಯದಿರುವ ಕುಟುಂಬದ ಇತರ ಸದಸ್ಯರ ಹಿತರಕ್ಷಣೆಗೆ ಸರ್ಕಾರ ಏನು ಕ್ರಮ ಕೈಗೊಂಡಿದೆ; | ಪಾಲುಪಾರಿಕತ್ತು ಹಾಜರುಪಡಿಸಿದಲ್ಲಿ ಮ್ಯುಟೇಷನ್ ನಡಾವಳಿ ನಡೆಸಿ ಪಹಣಿ ದಾಖಲಿಸಿ ಹಕ್ಕು ಬದಲಾವಣೆ ಮಾಡಲಾಗುತ್ತಿದೆ. |
| ಇ. | ಸದರಿ ಆದೇಶದ ಬದಲಾವಣೆ ಅಥವಾ ಮಾರ್ಪಾಡನ್ನು ಮಾಡಿ, ಸರ್ಕಾರ ಕುಟುಂಬದ ಎಲ್ಲಾ ಸದಸ್ಯರಿಗೂ ಹಕ್ಕು ದೊರೆಯುವಂತೆ ಕೂಡಲೇ ಕ್ರಮ ವಹಿಸುವುದೇ ? | ಪಾಲುಪಾರಿಕತ್ತು ಹಾಜರುಪಡಿಸಿದ ತರುವಾಯ ಹಕ್ಕು ಬದಲಾವಣೆಗೆ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಆರ್‌ಡಿ 138 ಟಿಆರ್‌ಎಂ 2021

(ಆರ್. ಅಶೋಕ)

ಕಂದಾಯ ಸಚಿವರು